


# ಕರ್ನಾಟಕ ವಿಧಾನ ಪರಿಷತ್ತು

## ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

## ಚುಕ್ಕೆ ರಹಿತ ಪ್ರಶ್ನೆ

ದಿನಾಂಕ : 22-03-2021 ಪ್ರಶ್ನೆ ಸಂಖ್ಯೆ : 1534 (1749)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಎಂ.ಎ. ಗೋಪಾಲಸ್ವಾಮಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರ ನೀಡಬೇಕಾದ ದಿನಾಂಕ : 22-03-2021

ಉತ್ತರಿಸುವ ಸಚಿವರು : ಅರಣ್ಯ ಮತ್ತು ಕನ್ನಡ ಮತ್ತು ಸಂಸ್ಕೃತಿ ಸಚಿವರು

ವಿಷಯ : ಕಾಡಾನೆ ಹಾವಳಿ ಕುರಿತು

(ಅ) ರಾಜ್ಯದಲ್ಲಿ ಕಾಡಾನೆಗಳ ಹಾವಳಿ ಹೆಚ್ಚಾಗಿರುವ ವಿಚಾರ ಸರ್ಕಾರದ ಗಮನಕ್ಕೆ ಬಂದಿದೆಯೇ; ಹಾಗಿದ್ದಲ್ಲಿ, ಈ ಕುರಿತು ಸರ್ಕಾರ ಕೈಗೊಂಡಿರುವ ಕ್ರಮಗಳೇನು; (ಸಂಪೂರ್ಣ ವಿವರ ನೀಡುವುದು)

(ಆ) ಕಳೆದ 5 ವರ್ಷಗಳಲ್ಲಿ ಹಾಸನ ಜಿಲ್ಲೆಯಲ್ಲಿ ದಾಖಲಾಗಿರುವ ಕಾಡಾನೆಗಳ ದಾಳಿ ಪ್ರಕರಣಗಳೆಷ್ಟು; ಈ ದಾಳಿಯಿಂದ ಉಂಟಾದ ಪ್ರಾಣಹಾನಿ ಮತ್ತು ಬೆಳೆ ನಷ್ಟವೆಷ್ಟು; (ವಿವರ ನೀಡುವುದು)

(ಇ) ಕಳೆದ 5 ವರ್ಷಗಳಲ್ಲಿ ಆನೆ ದಾಳಿಗೊಳಗಾದ ಕುಟುಂಬಗಳಿಗೆ ಸರ್ಕಾರ ನೀಡಿರುವ ಪರಿಹಾರವೆಷ್ಟು; ಈವರೆಗೂ ಎಷ್ಟು ಕುಟುಂಬಗಳಿಗೆ ಪರಿಹಾರ ನೀಡಲಾಗಿದೆ; (ಫಲಾನುಭವಿಯ ಹೆಸರು ಮತ್ತು ಗ್ರಾಮದ ವಿವರ ನೀಡುವುದು)

(ಈ) ಪರಿಹಾರ ನೀಡದೇ ಬಾಕಿ ಉಳಿದಿರುವ ಕುಟುಂಬಗಳೆಷ್ಟು; ಪರಿಹಾರ ನೀಡುವಲ್ಲಿ ವಿಳಂಬವಾಗುತ್ತಿರಲು ಕಾರಣಗಳೇನು; ಯಾವ ಕಾಲಮಿತಿಯಲ್ಲಿ ಉಳಿದ ಕುಟುಂಬಗಳಿಗೆ ಪರಿಹಾರ ನೀಡಲಾಗುವುದು? (ಸಂಪೂರ್ಣ ಮಾಹಿತಿ ನೀಡುವುದು)